## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 665
2. ಸದಸ್ಯರ ಹೆಸರು : ಶ್ರೀ ವಿಜಯಸಿಂಗ್
3. ಉತ್ತರಿಸಬೇಕಾದ ದಿನಾಂಕ : 14.12.2020
4. ಉತ್ತರಿಸುವ ಸಚಿವರು : ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಜೀವನಾಡಿಯಾಗಿರುವ ಬಿ.ಎಸ್.ಎಸ್.ಕೆ ಸಕ್ಕರೆ ಕಾರ್ಖಾನೆ ಕಳೆದ ಎರಡು ಹಂಗಾಮಿನಿಂದ ಪ್ರಾರಂಭ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ ಸದರಿ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುತ್ತಿದ್ದ ರೈತರು ಹಾಗೂ ಕಾರ್ಖಾನೆಯ ಕಾರ್ಮಿಕ ವರ್ಗವು ಸಂಕಷ್ಟಕ್ಕೆ ಸಿಲುಕಿರುವ ಬಗ್ಗೆ ಕೈಗೊಂಡಿರುವ ಪರ್ಯಾಯ ಹಾಗೂ ಪರಿಹಾರದ ಕ್ರಮಗಳೇನು; (ವಿವರ ನೀಡುವುದು) | ಕಾರ್ಖಾನೆಯು ಸ್ಥಗಿತಗೊಂಡಿರುವುದರಿಂದ ಈ ಕಾರ್ಖಾನೆಯ ಮೀಸಲು ಕ್ಷೇತ್ರದಲ್ಲಿ ಬೆಳೆದ ಕಬ್ಬನ್ನು ನೆರೆಯ ಸಕ್ಕರೆ ಕಾರ್ಖಾನೆಗಳಿಗೆ ಹಂಚಿಕೆ ಮಾಡುವುದರ ಮೂಲಕ ರೈತರ ಕಬ್ಬನ್ನು ಸಕಾಲಕ್ಕೆ ನುರಿಸುವ ವ್ಯವಸ್ಥೆಯನ್ನು ಮಾಡಲಾಗಿದೆ.<br>ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆಯು ಸಹಕಾರ ಸಂಘಗಳ ಕಾಯ್ದೆಯಡಿ ನೋಂದಣಿಯಾಗಿದ್ದು, ತನ್ನದೇ ಆದ ಆಸ್ತಿ ಮತ್ತು ಹೊಣೆಗಾರಿಕೆಗಳನ್ನು ಹೊಂದಿರುತ್ತದೆ. ಆದ್ದರಿಂದ ಈ ಕಾರ್ಖಾನೆಯೇ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ತನ್ನ ಜವಾಬ್ದಾರಿಗಳನ್ನು ತೀರುವಳಿ ಮಾಡಬೇಕಾಗಿರುತ್ತದೆ.<br>ಇದು ಸಾರ್ವಜನಿಕ ವಲಯದ ಕಾರ್ಖಾನೆಯಾಗಿರುವುದಿಲ್ಲ. ಆದ್ದರಿಂದ, ಸರ್ಕಾರದಿಂದ ಈ ಕಾರ್ಖಾನೆಯ ಕಾರ್ಮಿಕರ ವೇತನ ಬಾಕಿ ಮತ್ತು ಇತರೆ ಪಾವತಿಗೆ ಅನುದಾನ/ಪರಿಹಾರ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ.<br>ಈ ಕಾರ್ಖಾನೆಗೆ 2017-18ನೇ ಕಬ್ಬು ಅರೆಯುವ ಹಂಗಾಮಿಗಾಗಿ ಬೇಕಾಗುವ ದುಡಿಯುವ ಬಂಡವಾಳ ರೂ.10.00 ಕೋಟಿಗಳನ್ನು ಸಾಲವಾಗಿ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ಪಡೆಯಲು ರಾಜ್ಯ ಸರ್ಕಾರವು ಖಾತರಿ ನೀಡಿರುತ್ತದೆ. ಇದಲ್ಲದೆ, 2018-19ನೇ ಸಾಲಿನಲ್ಲಿ ದುಡಿಯುವ ಬಂಡವಾಳಕ್ಕಾಗಿ ರೂ.20.00 ಕೋಟಿಗಳ ಸಾಲವನ್ನು ನೀಡಿರುತ್ತದೆ. ಈ ಕಾರ್ಖಾನೆಗೆ ರಾಜ್ಯ ಸರ್ಕಾರದಿಂದ ಈವರೆಗೆ ರೂ.50.00 ಕೋಟಿಗಳಷ್ಟು ಆರ್ಥಿಕ ನೆರವನ್ನು ಸಾಲದ ರೂಪದಲ್ಲಿ ನೀಡಿರುತ್ತದೆ. ಆದಾಗ್ಯೂ ಕಾರ್ಖಾನೆಯು ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಕಬ್ಬು ಅರೆಯುವ ಕಾರ್ಯವನ್ನು ನಿರ್ವಹಿಸಿರುವುದಿಲ್ಲ. |
| ಇ) | ಸದರಿ ಕಾರ್ಖಾನೆಯ ಯಂತ್ರೋಪಕರಣಗಳು ದುಸ್ಥಿತಿಯಲ್ಲಿದ್ದು, ಕಾರ್ಖಾನೆಯ ಪುನಶ್ಚೇತನಕ್ಕಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಆರ್ಥಿಕ ಸಂಕಷ್ಟ ಮತ್ತು ಇತರೆ ಕಾರಣಗಳಿಂದ ಸ್ಥಗಿತಗೊಂಡಿರುವ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಮೂಲಕ ಪುನಶ್ಚೇತನಗೊಳಿಸುವುದು ಪ್ರಸ್ತುತ ರಾಜ್ಯಸರ್ಕಾರದ ನೀತಿಯಾಗಿರುತ್ತದೆ. ಆದ್ದರಿಂದ, ಈ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಮೂಲಕ ಪುನಶ್ಚೇತನಗೊಳಿಸುವ ಕುರಿತು ಪರಿಶೀಲಿಸಲು ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಿಂದ ವರದಿಯನ್ನು ಕೋರಲಾಗಿದೆ. |

ಸಂಖ್ಯೆ: ಸಿಐ 284 ಸಿಓಎಫ್ 2020

(ಅರಬೈಲ್ ಶಿವರಾಮ ಹೆಬ್ಬಾರ)
ಕಾರ್ಮಿಕ ಮತ್ತು ಸಕ್ಕರೆ ಸಚಿವರು